ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ಹುಣಸೂರು ಪಟ್ಟಣದ ಲಕ್ಷ್ಮಣತೀರ್ಥ ನದಿಯನ್ನು ಸ್ವಚ್ಚತೆಗೊಳಿಸುವ ಬಗ್ಗೆ.

ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

156 (88) ಮಾನ್ಯ ಅರಣ್ಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹುಣಸೂರು ಪಟ್ಟಣದ ಮಧ್ಯೆ ಹರಿಯುವ ಲಕ್ಷ್ಮಣತೀರ್ಥ ನದಿಯು ಕಲುಷಿತವಾಗಿದ್ದು, ಈ ನದಿಯನ್ನು ಮಾಲಿನ್ಯ ಮತ್ತು ಕಲುಷಿತ ಮುಕ್ತವಾಗಿಸಲು ಯೋಜನೆಯನ್ನು ರೂಪಿಸಲಾಗಿದೆಯೇ; ಯೋಜನೆಯ ವಿವರಗಳನ್ನು ಒದಗಿಸುವುದು;

(ಆ) ಈ ಯೋಜನೆಯ ಬಗ್ಗೆ ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; ಕೇಂದ್ರ ಸರ್ಕಾರದಿಂದ ಈ ಯೋಜನೆಗೆ ನೆರವು ದೊರಕಲಿದೆಯೇ; ಈ ಯೋಜನೆಯನ್ನು ಜಾರಿಗೊಳಿಸುವ ಮೂಲಕ ಹುಣಸೂರು ಪಟ್ಟಣದ ಮಧ್ಯೆ ಹರಿಯುವ ಈ ನದಿಯನ್ನು ಮಾಲಿನ್ಯ ಮುಕ್ತವಾಗಿಸಿ ಸ್ವಚ್ಛತೆಯನ್ನು ಕಾಪಾಡಲು ಕ್ರಮ ಜರುಗಿಸಲಾಗುವುದೇ?